# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ನಿರಾಣಿ ಹಣಮಂತ್ ರುದ್ರಪ್ಪ
ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1878
ಉತ್ತರಿಸಬೇಕಾದ ದಿನಾಂಕ : 15-03-2022
ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳನ್ನು ಸ್ಥಾಪಿಸಲು ಇರುವ ಮಾನದಂಡಗಳೇನು; | ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳನ್ನು ನೋಂದಣಿ ಮಾಡಲು ಸುತ್ತೋಲೆ ಸಂಖ್ಯೆ:ಸಿಆರ್‌ಡಿ/ಕೆಎಂಸಿ-04/179/2016-17, ದಿನಾಂಕ:12-05-2017 ಮತ್ತು ಸುತ್ತೋಲೆ ಸಂಖ್ಯೆ:ಆರ್‌ಸಿಎಸ್/ಸಿಆರ್‌ಡಿ/ಸಿಎಬಿ-2/30/2020-21, ದಿನಾಂಕ:24-06-2020 ರಲ್ಲಿ ಮಾನದಂಡಗಳನ್ನು ನಿಗಧಿಪಡಿಸಲಾಗಿದ್ದು, ಮಾನದಂಡಗಳು ಈ ಕೆಳಗಿನಂತಿವೆ.<br>1. ಪ್ರತಿ ಸಂಘವು ಕನಿಷ್ಟ 4000 ಎಕರೆ ಸಾಗುವಳಿ ಭೂಮಿಯನ್ನು ಹೊಂದಿರಬೇಕು.<br>2. ಸಂಘದ ಕಾರ್ಯಕ್ಷೇತ್ರವು ಕೇಂದ್ರಸ್ಥಾನದಿಂದ ಕನಿಷ್ಟ 05 ಕಿ.ಮೀ ಪರಿಧಿಯನ್ನು ಹೊಂದಿರಬೇಕು.<br>3. ಕನಿಷ್ಟ 600 ರೈತ ಕುಟುಂಬಗಳನ್ನು ಒಳಗೊಂಡಿರಬೇಕು.<br>4. ಒಂದು ಗ್ರಾಮವನ್ನು ಒಂದೇ ಸಂಘದ ವ್ಯಾಪ್ತಿಗೆ ಬರುವಂತೆ ನೋಡಿಕೊಳ್ಳತಕ್ಕದ್ದು.<br>5. ಒಂದು ಗ್ರಾಮ ಪಂಚಾಯ್ತಿಯಲ್ಲಿ ಒಂದಕ್ಕಿಂತ ಹೆಚ್ಚು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ನೋಂದಣಿ ಮಾಡಬೇಕಾದ ಪ್ರಸ್ತಾವೆಗಳು ಬಂದರೆ ಸಹಕಾರ ಸಂಘಗಳ ನಿಬಂಧಕರ ಪೂರ್ವಾನುಮತಿ ಪಡೆಯುವುದು.<br>6. ಒಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವು ಸಮಾಪನೆಗೊಂಡಿದ್ದು, ನೋಂದಣಿ ರದ್ದುಗೊಂಡಿದ್ದಲ್ಲಿ ಮಾತ್ರ ಅಂತಹ ಸಂಘದ ವ್ಯಾಪ್ತಿಯಲ್ಲಿ ಹೊಸ ಸಂಘವನ್ನು ನೋಂದಣಿ ಮಾಡಿ ಕಾರ್ಯನಿರ್ವಹಿಸುವಂತೆ ಕ್ರಮ ಜರುಗಿಸತಕ್ಕದ್ದು.<br>7. ಕನಿಷ್ಠ ರೂ. 20.00 ಲಕ್ಷಗಳಷ್ಟು ಅಲ್ಪಾವಧಿ ಸಾಲವನ್ನು ನೀಡುವ ಸಾಮರ್ಥ್ಯ ಹೊಂದಿರತಕ್ಕದ್ದು.<br>8. ಸಂಘವನ್ನು ವಿಭಜಿಸುವ ಅಥವಾ ಹಾಲಿ ಸಂಘದ ಶಾಖೆಯನ್ನು ತೆರೆಯುವ ಬಗ್ಗೆ ಹಾಲಿ ಇರುವ ಸಂಘದ ಸರ್ವಸದಸ್ಯರ ಸಭೆಯಲ್ಲಿ ಒಪ್ಪಿಗೆ ಪಡೆಯತಕ್ಕದ್ದು.<br>9. ಹಳೇ ಸಂಘವನ್ನು ವಿಭಜಿಸುವಾಗ ಮತ್ತು ಹೊಸ ಸಂಘವನ್ನು ಸ್ಥಾಪಿಸುವಾಗ ಸಹ ಮೇಲಿನ ಕನಿಷ್ಠ ಮಾನದಂಡಗಳನ್ನು ಪೂರೈಸತಕ್ಕದ್ದು. |

<table>
<tr>
<td>ಆ.</td>
<td>ಮಾನದಂಡವನ್ನು ಬದಲಾಯಿಸಿದ ವರ್ಷ ಯಾವುದು; ಮತ್ತು ಈ ಹಿಂದೆ ಇದ್ದ ಮತ್ತು ಪ್ರಸ್ತುತ ಇರುವ ಮಾನದಂಡಗಳ ಪ್ರತಿ ನೀಡುವುದು; ಹಿಂದೆ ಇದ್ದ ಮತ್ತು ಈಗಿನ ಮಾನದಂಡಕ್ಕೆ ಇರುವ ವ್ಯತ್ಯಾಸಗಳೇನು: (ಈ ಕುರಿತು ಸಂಪೂರ್ಣ ಮಾಹಿತಿ ನೀಡುವುದು)</td>
<td>2017 ರಲ್ಲಿ ಮಾನದಂಡವನ್ನು ಬದಲಾಯಿಸಿದೆ. ಈ ಹಿಂದೆ ಇದ್ದ ಮತ್ತು ಪ್ರಸ್ತುತ ಇರುವ ಮಾನದಂಡಗಳ ಮಾಹಿತಿಯನ್ನು ಅನುಬಂಧ-1 ಮತ್ತು ಅನುಬಂಧ-2ರಲ್ಲಿ ನೀಡಲಾಗಿದೆ.<br>
ಹಿಂದೆ ಇದ್ದ ಮಾನದಂಡಗಳು ಮತ್ತು ಈಗಿನ ಮಾನದಂಡಗಳಲ್ಲಿನ ವ್ಯತ್ಯಾಸಗಳು ಕೆಳಕಂಡಂತಿರುತ್ತವೆ.
<table>
<tr><th>ಹಿಂದೆ ಇದ್ದ ಮಾನದಂಡಗಳು</th><th>ಈಗಿನ ಮಾನದಂಡಗಳು</th></tr>
<tr>
<td>ಸುತ್ತೋಲೆ ಸಂಖ್ಯೆ:ಆರ್‌ಎಸ್‌ಆರ್/187/ಎಕ್ಸ್‌ಎಂಸಿ/2007-08 ದಿನಾಂಕ:24-04-2008 ರನ್ವಯ ವಿವರ ಕೆಳಕಂಡಂತಿವೆ. ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 4 ರನ್ವಯ ಸಹಕಾರ ಸಂಘಗಳನ್ನು ನೋಂದಣಿ ಮಾಡುವಾಗ ಆರ್ಥಿಕ ಸದೃಢತೆಯಿಂದ ನಡೆಯುವ ಸಾಧ್ಯತೆಯಿದೆ ಎಂಬುದನ್ನು ಹಾಗೂ ಹಾಲಿ ಇರುವ ಸಹಕಾರ ಸಂಘಗಳ ಬೆಳವಣಿಗೆಗೆ ಯಾವುದೇ ಬಾಧಕ ಉಂಟಾಗುವುದಿಲ್ಲ ಎಂಬುದನ್ನು ಖಾತ್ರಿ ಪಡಿಸಿಕೊಳ್ಳತಕ್ಕದ್ದು.<br>
1. ಭಾರತೀಯ ರಿಸರ್ವ್ ಬ್ಯಾಂಕ್/ನಬಾರ್ಡ್ ಮಾರ್ಗಸೂಚಿಗಳನ್ನು/ ನಿಬಂಧನೆಗಳನ್ನು ಅನುಸರಿಸತಕ್ಕದ್ದು. ನಬಾರ್ಡ್ ನಿಬಂಧನೆಗಳು ಕೆಳಕಂಡಂತಿವೆ. (ಅನುಬಂಧ-3ರಲ್ಲಿ ನೀಡಲಾಗಿದೆ)<br>
• ಪ್ರತಿಯೊಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವು 5000 ಎಕರೆ ಸಾಗುವಳಿ ಪ್ರದೇಶ ಹೊಂದಿರಬೇಕು.<br>
• ಸಂಘದ ಕಾರ್ಯಕ್ಷೇತ್ರವು ಕೇಂದ್ರ ಸ್ಥಾನದಿಂದ 8 ಕಿ.ಮೀ.ಗಳ ಪರಿಧಿಯನ್ನು ಮೀರಬಾರದು.<br>
• ಪ್ರತೀ ಸಂಘವೂ 600</td>
<td>ಸುತ್ತೋಲೆ ಸಂಖ್ಯೆ:ಸಿಆರ್‌ಡಿ/ಕೆಎಂಸಿ-04/179/2016-17, ದಿನಾಂಕ: 12.05.2017 ಮತ್ತು ಸುತ್ತೋಲೆ ಸಂಖ್ಯೆ:ಆರ್‌ಸಿಎಸ್/ಸಿಆರ್‌ಡಿ/ಸಿಎಬಿ-2/30/2020-21, ದಿನಾಂಕ: 24.06.2020 ರನ್ವಯ ಕೆಳಕಂಡಂತಿವೆ.<br>
1. ಪ್ರತಿ ಸಂಘವು ಕನಿಷ್ಟ 4000 ಎಕರೆ ಸಾಗುವಳಿ ಭೂಮಿಯನ್ನು ಹೊಂದಿರಬೇಕು.<br>
2. ಸಂಘದ ಕಾರ್ಯಕ್ಷೇತ್ರವು ಕೇಂದ್ರಸ್ಥಾನದಿಂದ ಕನಿಷ್ಟ 05 ಕಿ.ಮೀ ಪರಿದಿಯನ್ನು ಹೊಂದಿರಬೇಕು.<br>
3. ಕನಿಷ್ಟ 600 ರೈತ ಕುಟುಂಬವನ್ನು ಹೊಂದಿರುವ ಗ್ರಾಮಗಳಾಗಿರಬೇಕು.<br>
4. ಒಂದು ಗ್ರಾಮವನ್ನು ಒಂದೇ ಸಂಘದ ವ್ಯಾಪ್ತಿಗೆ ಬರುವಂತೆ ನೋಡಿಕೊಳ್ಳತಕ್ಕದ್ದು.<br>
5. ಒಂದು ಗ್ರಾಮ ಪಂಚಾಯ್ತಿಯಲ್ಲಿ ಒಂದಕ್ಕಿಂತ ಹೆಚ್ಚು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ನೋಂದಣಿ ಮಾಡಬೇಕಾದ ಪ್ರಸ್ತಾವೆಗಳು ಬಂದರೆ ಸಹಕಾರ ಸಂಘಗಳ ನಿಬಂಧಕರ ಪೂರ್ವಾನುಮತಿ ಪಡೆಯುವುದು.<br>
6. ಒಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವು ಸಮಾಪನೆಗೊಂಡಿದ್ದು, ನೋಂದಣಿ ರದ್ದುಗೊಂಡಿದ್ದಲ್ಲಿ ಮಾತ್ರ ಅಂತಹ ಸಂಘದ</td>
</tr>
</table>
</td>
</tr>
</table>

| | | |
|---|---|---|
| | | ಕುಟುಂಬಗಳ ಅವಶ್ಯಕತೆಯನ್ನು ಪೂರೈಸತಕ್ಕದ್ದು.<br>• ಒಂದು ಗ್ರಾಮದ ವ್ಯಾಪ್ತಿಯಲ್ಲಿ ಒಂದಕ್ಕಿಂತ ಹೆಚ್ಚಿನ ಸಂಘಗಳನ್ನು ಸ್ಥಾಪಿಸಬಾರದು.<br>• ಕನಿಷ್ಟ ರೂ.20.00 ಲಕ್ಷಗಳಷ್ಟು ಅಲ್ಪಾವಧಿ ಸಾಲ ನೀಡುವ ಸಾಮರ್ಥ್ಯ ಹೊಂದಿರಬೇಕು.<br>• ಸಂಘಗಳ ಕಾರ್ಯಕ್ಷೇತ್ರಗಳು ಅತಿಕ್ರಮ ಮೇಲೆ ವ್ಯಾಪಿಸತಕ್ಕದ್ದಲ್ಲ.<br><br>ವ್ಯಾಪ್ತಿಯಲ್ಲಿ ಹೊಸ ಸಂಘವನ್ನು ನೋಂದಣಿ ಮಾಡಿ ಕಾರ್ಯನಿರ್ವಹಿಸುವಂತೆ ಕ್ರಮ ಜರುಗಿಸತಕ್ಕದ್ದು.<br>7. ಕನಿಷ್ಠ ರೂ.20.00 ಲಕ್ಷಗಳಷ್ಟು ಅಲ್ಪಾವಧಿ ಸಾಲವನ್ನು ನೀಡುವ ಸಾಮರ್ಥ್ಯ ಹೊಂದಿರತಕ್ಕದ್ದು.<br>8. ಸಂಘವನ್ನು ವಿಭಜಿಸುವ ಅಥವಾ ಹಾಲಿ ಸಂಘದ ಶಾಖೆಯನ್ನು ತೆರೆಯುವ ಬಗ್ಗೆ ಹಾಲಿ ಇರುವ ಸಂಘದ ಸರ್ವಸದಸ್ಯರ ಸಭೆಯಲ್ಲಿ ನಿರ್ಣಯಕ್ಕೆ ಮಂಡಿಸಿ ಕ್ರಮವಿಡತಕ್ಕದ್ದು.<br>9. ಹಳೇ ಸಂಘವನ್ನು ವಿಭಜಿಸುವಾಗ ಮತ್ತು ಹೊಸ ಸಂಘವನ್ನು ಸ್ಥಾಪಿಸುವಾಗ ಸಹ ಮೇಲಿನ ಕನಿಷ್ಠ ಮಾನದಂಡಗಳನ್ನು ಪೂರೈಸತಕ್ಕದ್ದು. |
| ಇ. | ಜನ ಸಂಖ್ಯೆಗನುಗುಣವಾಗಿ ಹೆಚ್ಚುವರಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ಸ್ಥಾಪಿಸುವುದರಿಂದ ಸರ್ಕಾರಕ್ಕೆ ಆಗುವ ಹಾನಿ ಏನು; | ಜನಸಂಖ್ಯೆಗನುಗುಣವಾಗಿ ಹೆಚ್ಚುವರಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ಸ್ಥಾಪಿಸುವುದರಿಂದ ಸರ್ಕಾರಕ್ಕೆ ಯಾವುದೇ ಹಾನಿ ಆಗುವುದಿಲ್ಲ. ಆದರೆ, ಹಾಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ವ್ಯಾಪ್ತಿಯಲ್ಲಿ ಮೇಲೆ ಹೇಳಿರುವ ಮಾನದಂಡಗಳನ್ನು ಅನುಸರಿಸದೇ ಹೊಸದಾಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವನ್ನು ನೋಂದಣಿ ಮಾಡಿದಲ್ಲಿ ಹಾಲಿ ಇರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ವ್ಯವಹಾರ ಕುಂಠಿತವಾಗಿ ನಷ್ಟ ಹೊಂದಿ ಹೊಸದಗಿ ಸ್ಥಾಪಿಸಲಾಗುವ ಸಂಘವು ಸಹ ಬೆಳವಣಿಗೆ ಸಾಧಿಸದೇ ಸಂಘದ ನೋಂದಣಿಯ ಮೂಲ ಧ್ಯೇಯೋದ್ದೇಶಗಳನ್ನು ಈಡೇರಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ಮಾನದಂಡಗಳನ್ನು ನಿಗದಿಪಡಿಸಿದೆ. |
| ಈ. | ಜನಸಂಖ್ಯೆಗನುಗುಣವಾಗಿ ಅಥವಾ ಅಲ್ಲಿನ ಜನರ ಬೇಡಿಕೆಗನುಗುಣವಾಗಿ ಹೆಚ್ಚುವರಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ಸ್ಥಾಪನೆ ಮಾಡಲು ಸರ್ಕಾರ ಅನುಮತಿ ನೀಡುವುದೆ; | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ರಚನೆ ಕುರಿತು ದಿನಾಂಕ:24.04.2008ರ ಸಹಕಾರ ಸಂಘಗಳ ನಿಬಂಧಕರ ಸುತ್ತೋಲೆಯಲ್ಲಿ ಕನಿಷ್ಠ 5000 ಎಕರೆ ಸಾಗುವಳಿ ಭೂಮಿ ಹಾಗೂ 8 ಕಿ.ಮೀ ಪರಿಧಿಯನ್ನು ಹೊಂದಿರಬೇಕೆಂದು ನಿಗಧಿಪಡಿಸಲಾಗಿದ್ದ ಮಾನದಂಡವನ್ನು ಸರಳೀಕರಣಗೊಳಿಸಿ, ದಿನಾಂಕ:12-05-2017 ರಲ್ಲಿ ಹೊರಡಿಸಿದ ಪರಿಷ್ಕೃತ ಸುತ್ತೋಲೆಯಲ್ಲಿ ಕನಿಷ್ಠ 4000 ಎಕರೆ ಸಾಗುವಳಿ ಭೂಮಿ ಹಾಗೂ ಕನಿಷ್ಠ 5 ಕಿ.ಮೀ. ಪರಿಧಿಗೆ ಕಡಿಮೆಗೊಳಿಸಿದ್ದು ಕನಿಷ್ಠ ರೂ.20.00 ಲಕ್ಷಗಳಷ್ಟು ಅಲ್ಪಾವಧಿ ಸಾಲ ನೀಡುವ ಸಾಮರ್ಥ್ಯ ಹೊಂದಿದ್ದು ಮೇಲಿನ ಅರ್ಹತೆಗಳನ್ನು ಹೊಂದಿದ್ದಲ್ಲಿ |

| | | |
|---|---|---|
| | | ಬೇಡಿಕೆಗನುಗುಣವಾಗಿ ಹೆಚ್ಚುವರಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ಸ್ಥಾಪನೆ ಮಾಡಲು ಅನುಮತಿ ನೀಡಲಾಗುವುದು. |
| ಉ. | • ಗ್ರಾಮ ಪಂಚಾಯಿತಿಗೊಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ಸ್ಥಾಪಿಸುವ ಕುರಿತು ಸರ್ಕಾರ ಚಿಂತನೆ ನಡೆಸಿದೆಯೇ: ನಡೆಸಿದ್ದಲ್ಲಿ, ಈ ಕುರಿತು ಸಂಪೂರ್ಣ ಮಾಹಿತಿ ನೀಡುವುದು? | ಹೌದು.<br>ಮಾನ್ಯ ಮುಖ್ಯಮಂತ್ರಿಗಳ 2017-18ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 71 ರಲ್ಲಿ ಆರ್ಥಿಕವಾಗಿ ಕಾರ್ಯಸಾಧುವೆನಿಸುವ ಪ್ರತಿಯೊಂದು ಗ್ರಾಮ ಪಂಚಾಯ್ತಿಯಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ಸ್ಥಾಪಿಸಲು ಕ್ರಮ ಕೈಗೊಳ್ಳಲಾಗುವುದೆಂದು ಈಗಾಗಲೇ ಘೋಷಿಸಲಾಗಿದೆ.<br>ಈ ಸಂಬಂಧ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 4 ರನ್ವಯ ಹಾಗೂ ಸುತ್ತೋಲೆ ಸಂಖ್ಯೆ:ಸಿಆರ್‌ಡಿ/ಕೆಎಂಸಿ-04/179/2016-17, ದಿನಾಂಕ:12-05-2017 ಮತ್ತು ಸುತ್ತೋಲೆ ಸಂಖ್ಯೆ:ಆರ್‌ಸಿಎಸ್/ಸಿಆರ್‌ಡಿ/ಸಿಎಬಿ-2/30/2020-21, ದಿನಾಂಕ:24-06-2020ರಲ್ಲಿ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ. ಗ್ರಾಮ ಪಂಚಾಯಿತಿಗೊಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವನ್ನು ಸ್ಥಾಪಿಸುವ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. ಯಾವ ಯಾವ ಗ್ರಾಮ ಪಂಚಾಯ್ತಿಗಳಲ್ಲಿ ಸಬಲತೆ ಹೊಂದಬಹುದಾಗಿದೆಯೋ ಆಯಾ ಪ್ರದೇಶಗಳಲ್ಲಿ ಹೊಸ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ರಚಿಸಲು ಅನುಮತಿಸಲಾಗಿದೆ. |

ಸಂಖ್ಯೆ: ಸಿಒ 97 ಸಿಎಲ್‌ಎಸ್ 2022

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

ಅನುಬಂಧ - I

1

# ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಅಲಿ ಅಸ್ಕರ್ ರಸ್ತೆ, ಬೆಂಗಳೂರು-52.

ಸಂಖ್ಯೆ: ಆರ್‌ಎಸ್‌ಆರ್/187/ಎಕ್ಸ್‌ಎಂಸಿ/2007-08.

ದಿನಾಂಕ: 24-4-2008.

## ಸುತ್ತೋಲೆ

ವಿಷಯ:- ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ನೋಂದಣಿ ಮಾಡುವ ಬಗ್ಗೆ.

ಉಲ್ಲೇಖ:- 1) ಸರ್ಕಾರದ ಪತ್ರ ಸಂ.ಸಿಒ/02/ಸಿಎಚ್‌ಎಸ್/2008, ದಿ: 9-1-2008.
2) ಈ ಕಛೇರಿಯ ಸುತ್ತೋಲೆ ಸಮಸಂಖ್ಯೆ ದಿನಾಂಕ 26-2-2008.
3) ಈ ಕಛೇರಿಯ ತಿದ್ದುಪಡಿ ಸಮಸಂಖ್ಯೆ ದಿನಾಂಕ 3-4-2008.

ರಾಜ್ಯದಲ್ಲಿ ಹೊಸ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನೋಂದಣಿ ಮಾಡಬಾರದೆಂದು ಒಂದು ವೇಳೆ ನೋಂದಣಿ ಮಾಡುವ ಅಗತ್ಯತೆ ಇದ್ದಲ್ಲಿ, ಸರ್ಕಾರದಿಂದ ಆಡಳಿತಾತ್ಮಕವಾಗಿ ಪೂರ್ವಾನುಮತಿಯನ್ನು ಪಡೆಯಬೇಕೆಂದು, ಹೊಸ ಗೃಹ ನಿರ್ಮಾಣ ಸಹಕಾರ ಸಂಘಗಳನ್ನು ಕೆಲವು ಜಿಲ್ಲೆಗಳಲ್ಲಿ ನೋಂದಣಿ ಮಾಡಬಾರದೆಂದೂ, ಒಂದು ವೇಳೆ ನೋಂದಣಿ ಮಾಡಲೇಬೇಕಾದ ಅಗತ್ಯತೆ ಇದ್ದಲ್ಲಿ ಸರ್ಕಾರದಿಂದ ಆಡಳಿತಾತ್ಮಕವಾಗಿ ಪೂರ್ವಾನುಮೋದನೆ ಪಡೆಯಬೇಕೆಂದು ಹಾಗೂ ಬೆಂಗಳೂರು ನಗರದಲ್ಲಿ ಹೊಸ ಪತ್ತಿನ ಸಹಕಾರ ಸಂಘ ನೋಂದಣಿ ಮಾಡಬಾರದೆಂದೂ, ಒಂದು ವೇಳೆ ನೋಂದಣಿ ಮಾಡಲೇಬೇಕಾದಲ್ಲಿ ಸರ್ಕಾರದಿಂದ ಆಡಳಿತಾತ್ಮಕವಾಗಿ ಪೂರ್ವಾನುಮತಿಯನ್ನು ಪಡೆಯಬೇಕೆಂದೂ ಸೂಚಿಸಿದ್ದ ಆದೇಶ/ಸುತ್ತೋಲೆ/ಸೂಚನೆಗಳನ್ನು ಉಲ್ಲೇಖ(1) ರ ಪತ್ರದಲ್ಲಿ ಹಿಂಪಡೆಯಲಾಗಿದೆ. ಹೊಸ ಸಹಕಾರ ಸಂಘಗಳನ್ನು ಸ್ಥಾಪಿಸಲು ಪ್ರಸ್ತುತದಲ್ಲಿ ಇರುವ ಅಡೆ-ತಡೆಗಳನ್ನು ತೆಗೆದುಹಾಕುವುದು ಸಮಂಜಸವೆಂದು ಭಾವಿಸಿ, ಇನ್ನು ಮುಂದೆ ಹೊಸ ಸಹಕಾರ ಸಂಘಗಳನ್ನು ನೋಂದಾಯಿಸಲು ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಕಳುಹಿಸಬಾರದೆಂದೂ ಮತ್ತು ಸಹಕಾರ ಸಂಘಗಳ ನಿಬಂಧಕರು ನೋಂದಣಿ ಅಧಿಕಾರಗಳನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರನ್ವಯ ಚಲಾಯಿಸತಕ್ಕದ್ದೆಂದೂ ಸಹ ಸರ್ಕಾರವು ಸೂಚಿಸಿರುತ್ತದೆ. ಈ ದಿಸೆಯಲ್ಲಿ ಸಹಕಾರ ಸಂಘಗಳ ನಿಬಂಧಕರು ಸೂಕ್ತ ಮಾರ್ಗಸೂಚಿಗಳನ್ನು ಅಧೀನ ಅಧಿಕಾರಿಗಳಿಗೆ ನೀಡಬಹುದೆಂದು ತಿಳಿಸಿದೆ. ಈ ಹಿನ್ನೆಲೆಯಲ್ಲಿ ಈ ಕಛೇರಿಯ ಸುತ್ತೋಲೆ ಸಮಸಂಖ್ಯೆ ದಿನಾಂಕ 26-2-2008 ರಲ್ಲಿ ಮಾರ್ಗಸೂಚಿಗಳನ್ನು ನೀಡಲಾಗಿತ್ತು. ತದನಂತರ ತಿದ್ದುಪಡಿ ಸಹ ಸಮಸಂಖ್ಯೆ ದಿನಾಂಕ 3-4-2008 ರಲ್ಲಿ ನೀಡಲಾಗಿತ್ತು. ಉಲ್ಲೇಖ(2)

ಹಾಗೂ (3) ರಲ್ಲಿನ ಸದರಿ ಸುತ್ತೋಲೆ ಮತ್ತು ತಿದ್ದುಪಡಿಯನ್ನು ರದ್ದುಪಡಿಸಿ ಹೊಸದಾಗಿ ಕೃಷಿ ಪತ್ತಿನ ಸಹಕಾರ ಸಂಘಗಳ ನೋಂದಣಿಗೆ ಈ ಕೆಳಕಂಡ ಮಾರ್ಗಸೂಚಿಗಳನ್ನು ನೀಡಲಾಗಿದೆ.

**ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ನೋಂದಣಿ ಮಾರ್ಗಸೂಚಿಗಳು:-**

1. ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 4 ರನ್ವಯ ಸಹಕಾರ ಸಂಘಗಳನ್ನು ಸದರಿ ಅಧಿನಿಯಮದಡಿ ಸೂಚಿಸಿರುವ ಷರತ್ತುಗೊಳಪಟ್ಟು ನಿಯಮಾನುಸಾರ ಆರ್ಥಿಕ ಸದೃಢತೆಯಿಂದ (economically viable) ನಡೆಯುವ ಸಾಧ್ಯತೆಯಿದೆ ಎಂಬುದನ್ನು ಹಾಗೂ ಹಾಗೆ ಮಾಡುವುದರಿಂದ ಹಾಲಿ ಇರುವ ಸಹಕಾರ ಸಂಘಗಳ ಬೆಳವಣಿಗೆಗೆ ಯಾವುದೇ ಬಾಧಕ ಉಂಟಾಗುವುದಿಲ್ಲ ಎಂಬುದನ್ನು ಖಾತರಿಪಡಿಸಿಕೊಳ್ಳತಕ್ಕದ್ದು. ಇದರ ಜೊತೆಗೆ ಮುಂದಿನ ಮಾರ್ಗಸೂಚಿಗಳನ್ನು ಅನುಸರಿಸತಕ್ಕದ್ದು.

2. ಯಾವುದೇ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ನೋಂದಾಯಿಸ ಬೇಕಾದಲ್ಲಿ ಭಾರತೀಯ ರಿಸರ್ವ್ ಬ್ಯಾಂಕು/ನಬಾರ್ಡ್ ವಿಧಿಸಿರುವ ಮಾರ್ಗಸೂಚಿಗಳನ್ನು/ನಿಬಂಧನೆಗಳನ್ನು ಅನುಸರಿಸತಕ್ಕದ್ದು.

3. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವು ಆರ್ಥಿಕವಾಗಿ ಸಶಕ್ತವಾಗಿ (economically viable) ಕಾರ್ಯನಿರ್ವಹಿಸಬೇಕೆನ್ನುವುದಕ್ಕೆ ನಬಾರ್ಡ್ ಪ್ರಾಧಾನ್ಯತೆ ನೀಡುತ್ತದೆ. ಆ ದಿಸೆಯಲ್ಲಿ ನಬಾರ್ಡ್ ನಿಬಂಧನೆಗಳನ್ನು ಪುನಃ ಈ ಕೆಳಗೆ ಉಲ್ಲೇಖಿಸಲಾಗಿದೆ.

ಅ) ಪ್ರತಿಯೊಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವು 5000 ಎಕರೆಗಳಷ್ಟು ಸಾಗುವಳಿ ಪ್ರದೇಶವನ್ನು ಒಳಗೊಂಡಿರಬೇಕು.

ಆ) ಸಾಧ್ಯವಾದಷ್ಟು ಹೆಚ್ಚಿಗೆ ಸಂಘದ ಕಾರ್ಯಕ್ಷೇತ್ರವು ಕೇಂದ್ರಸ್ಥಾನದಿಂದ 8 ಕಿ.ಮೀ.ಗಳ ಪರಿಧಿಯನ್ನು ಮೀರಬಾರದು.

ಇ) ಸಾಮಾನ್ಯವಾಗಿ ಅಂತಹ ಸಂಘಗಳು ಒಂದು ಗ್ರಾಮ ಪಂಚಾಯಿತಿ ಕಾರ್ಯಕ್ಷೇತ್ರಕ್ಕೆ ಅನುಗುಣವಾಗಿ ಒಂದು ಕೃಷಿ ಪತ್ತಿನ ಸಹಕಾರ ಸಂಘವನ್ನು ಸ್ಥಾಪಿಸಲು ಅನುಮತಿ ನೀಡಲಾಗಿದೆ. ಒಂದು ಗ್ರಾಮದ ವ್ಯಾಪ್ತಿಯಲ್ಲಿ ಒಂದಕ್ಕಿಂತ ಹೆಚ್ಚಿನ ಸಂಘಗಳನ್ನು ಸ್ಥಾಪಿಸಬಾರದು.

ಈ) ಕಡಿಮೆಯೆಂದರೆ ಕನಿಷ್ಠ ರೂ.20.00 ಲಕ್ಷಗಳಷ್ಟು ಅಲ್ಪಾವಧಿ ಸಾಲವನ್ನು ನೀಡುವ ಸಾಮರ್ಥ್ಯ ಹೊಂದಿರಬೇಕು.

ಉ) ಸಂಘಗಳ ಕಾರ್ಯಕ್ಷೇತ್ರಗಳು ಅತಿಕ್ರಮ(overlap) ಮೇಲೆ ವ್ಯಾಪಿಸತಕ್ಕದ್ದಲ್ಲ.

ಊ) ಪ್ರತಿಯೊಂದು ಸಂಘವು ಕನಿಷ್ಟ 600 ಕುಟುಂಬಗಳ ಅವಶ್ಯಕತೆಗಳನ್ನು ಪೂರೈಸುವ ಸಾಮರ್ಥ್ಯ ಹೊಂದಿರಬೇಕು.

ಋ) ಹೊಸದಾಗಿ ನೋಂದಣಿ ಮಾಡುವ ಅವಶ್ಯಕತೆ ಕಂಡುಬಂದಲ್ಲಿ ಮೇಲ್ಕಂಡ ಮಾರ್ಗಸೂಚಿಗಳನ್ನು ಪಾಲನೆ/ಈಡೇರಿಸುವ (fulfillment) ಸಾಮರ್ಥ್ಯ ಹೊಂದಿರಬೇಕು ಹಾಗೂ ಕನಿಷ್ಟ ರೂ.2.00 ಲಕ್ಷ ಷೇರು ಹಣ ಸಂಗ್ರಹಿಸಬೇಕು.

ಈ ಮಾರ್ಗಸೂಚಿಗಳನ್ನು ಅನುಸರಿಸಿ ಇನ್ನು ಮುಂದೆ ಸಕ್ಷಮ ಪ್ರಾಧಿಕಾರಿಗಳಾದ ಸಹಾಯಕ ನಿಬಂಧಕರು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ನಿಯಮಾನುಸಾರ ನೋಂದಣಿ ಮಾಡಲು ಸೂಚಿಸಲಾಗಿದೆ.

ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

ಗೆ,

1. ಎಲ್ಲಾ ಉಪವಿಭಾಗೀಯ ಸಹಕಾರ ಸಂಘಗಳ ಸಹಾಯಕ ನಿಬಂಧಕರುಗಳಿಗೆ.
2. ಎಲ್ಲಾ ಜಿಲ್ಲೆಗಳ ಸಹಕಾರ ಸಂಘಗಳ ಉಪ ನಿಬಂಧಕರುಗಳಿಗೆ.
3. ಎಲ್ಲಾ ಪ್ರಾಂತೀಯ ಸಹಕಾರ ಸಂಘಗಳ ಜಂಟಿ ನಿಬಂಧಕರುಗಳಿಗೆ.
4. ಕೇಂದ್ರ ಕಛೇರಿಯ ಎಲ್ಲಾ ಕಾರ್ಯನಿರ್ವಹಣಾ ಮುಖ್ಯಸ್ಥರುಗಳಿಗೆ– ಸೂಕ್ತ ಕ್ರಮಕ್ಕಾಗಿ.

ಪ್ರತಿಯನ್ನು:-

1. ಗೌರವಪೂರ್ವಕವಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ, ಸಹಕಾರ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು ಇವರ ಅವಗಾಹನೆಗೆ ಸಲ್ಲಿಸಿದೆ.
2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸೌಹಾರ್ದ ಸಂಯುಕ್ತ ಸಹಕಾರಿ ನಿ., ನಂ.132, 1ನೇ ಮಹಡಿ, ಕೆ.ಹೆಚ್.ರಸ್ತೆ, ಬೆಂಗಳೂರು-27.
3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ನಿ., ರೇಸ್ ಕೋರ್ಸ್ ರಸ್ತೆ, ಬೆಂಗಳೂರು.
4. ಆಯುಕ್ತರು, ಕೈಮಗ್ಗ ಮತ್ತು ಜವಳಿ ಇಲಾಖೆ, ನೃಪತುಂಗ ರಸ್ತೆ, ಬೆಂಗಳೂರು.
5. ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರು, ಕ್ರೆಸೆಂಟ್ ರಸ್ತೆ, ಬೆಂಗಳೂರು.
6. ನಿರ್ದೇಶಕರು, ಲೆಕ್ಕಪರಿಶೋಧನಾ ಇಲಾಖೆ, ನಂ.32, ಜಯನಿವಾಸ, ಶಂಕರಮಠ ರಸ್ತೆ, ಬೆಂಗಳೂರು.

ಯ: 24/4

ಅನುಬಂಧ-2

ಕರ್ನಾಟಕ ಸರ್ಕಾರ
(ಸಹಕಾರ ಇಲಾಖೆ)

ಸಹಕಾರ ಸಂಘಗಳ ನಿಬಂಧಕರ ಕಛೇರಿ, ಕರ್ನಾಟಕ ರಾಜ್ಯ, ನಂ.1, ಅಲಿ-ಆಸ್ಕರ್ ರಸ್ತೆ, ಬೆಂಗಳೂರು - 52

ಸಂಖ್ಯೆ:ಆರ್‌ಸಿಎಸ್/ಸಿಆರ್‌ಡಿ/ಸಿಎಬಿ-2/30/2020-21 ದಿನಾಂಕ: 24-06-2020

:: ಸುತ್ತೋಲೆ ::

ವಿಷಯ:- ರಾಜ್ಯದಲ್ಲಿ ಗ್ರಾಮ ಪಂಚಾಯಿತಿಗೆ ಒಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವನ್ನು ರಚಿಸುವ ಕುರಿತು ಸ್ಪಷ್ಟೀಕರಣ.

ಉಲ್ಲೇಖ:- (1) ಸಹಕಾರ ಸಂಘಗಳ ನಿಬಂಧಕರ ಸುತ್ತೋಲೆ ಸಂಖ್ಯೆ: ಸಿಆರ್‌ಡಿ/ಕೆಎಂಸಿ-4 179/ 2020, ದಿನಾಂಕ 12-05-2017.

##

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖ (1) ರ ಸುತ್ತೋಲೆಯಲ್ಲಿ ರಾಜ್ಯದಲ್ಲಿ ಪ್ರತಿ ಗ್ರಾಮ ಪಂಚಾಯ್ತಿಗೆ ಒಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವನ್ನು ರಚಿಸುವ ಕುರಿತು ವಿವರವಾದ ಮಾರ್ಗಸೂಚಿಗಳನ್ನು ನೀಡಲಾಗಿರುತ್ತದೆ. ಅಲ್ಲದೇ ನಬಾರ್ಡ್ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ರಚಿಸುವ ಕುರಿತು ನಿರ್ದಿಷ್ಟವಾದ ಮಾರ್ಗಸೂಚಿಗಳನ್ನು ಸಹ ನೀಡಿರುತ್ತದೆ.

ರಾಜ್ಯದಲ್ಲಿ ಇತ್ತೀಚಿನ ವರದಿಗಳ ಪ್ರಕಾರ ಈ ಕಛೇರಿಯ ಸುತ್ತೋಲೆ ಮತ್ತು ನಬಾರ್ಡ್ ಮಾರ್ಗಸೂಚಿಗಳನ್ನು ಮೀರಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ನೋಂದಣಿ ಮಾಡಲಾಗುತ್ತಿದೆ. ಇದರಿಂದ ಈ ಹಿಂದೆ ನೋಂದಣಿಯಾಗಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಆರ್ಥಿಕವಾಗಿ ದುರ್ಬಲಗೊಂಡು ನಿಷ್ಕ್ರಿಯ ಹಂತಕ್ಕೆ ತಲುಪುತ್ತವೆ. ಮುಂದುವರೆದು, ಉಲ್ಲೇಖದ ಸುತ್ತೋಲೆಯಲ್ಲಿ ಒಂದು ಜಿಲ್ಲಾ ಮಟ್ಟದ ಸಮಿತಿಯನ್ನು ರಚಿಸಿದ್ದರೂ ಸಹ ಸದರಿ ಸಮಿತಿಯು ನಿಷ್ಕ್ರಿಯಗೊಂಡು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿಲ್ಲ. ಮೇಲ್ಕಂಡ ಹಿನ್ನೆಲೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ:

1. ಉಲ್ಲೇಖ (1)ರ ಸುತ್ತೋಲೆಯಲ್ಲಿ ರಚಿಸಿರುವ ಸಮಿತಿಯನ್ನು ರದ್ದುಗೊಳಿಸಲಾಗಿದೆ.
2. ಒಂದು ಗ್ರಾಮ ಪಂಚಾಯ್ತಿಯಲ್ಲಿ ಒಂದಕ್ಕಿಂತ ಹೆಚ್ಚು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ನೋಂದಣಿ ಮಾಡಬೇಕಾದ ಪ್ರಸ್ತಾವನೆಗಳು ಬಂದರೆ ಸಹಕಾರ ಸಂಘಗಳ ನಿಬಂಧಕರ ಪೂರ್ವಾನುಮತಿ ಪಡೆಯಲು ಸೂಚಿಸಲಾಗಿದೆ
3. ಒಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವು ಸಮಾಪನೆಗೊಂಡಿದ್ದು, ನೋಂದಣಿ ರದ್ದುಗೊಂಡಿದ್ದಲ್ಲಿ ಮಾತ್ರ ಅಂತಹ ಸಂಘದ ವ್ಯಾಪ್ತಿಯಲ್ಲಿ ಹೊಸ ಸಂಘವನ್ನು ನೋಂದಣಿ ಮಾಡಿ ಕಾರ್ಯನಿರ್ವಹಿಸುವಂತೆ ಕ್ರಮ ಜರುಗಿಸತಕ್ಕದ್ದು.

ಈ ಸುತ್ತೋಲೆಯ ಸೂಚನೆಗಳನ್ನು ಉಲ್ಲಂಘಿಸಿದಲ್ಲಿ, ಸಂಬಂಧಿಸಿದ ನೋಂದಣಿ ಅಧಿಕಾರಿ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗುವುದು. ಈ ಸುತ್ತೋಲೆಯು ತಕ್ಷಣದಿಂದ ಜಾರಿಗೆ ಬರುತ್ತದೆ. ಈ ಸುತ್ತೋಲೆ ತಲುಪಿದ್ದಕ್ಕೆ ಸ್ವೀಕೃತಿಯನ್ನು ಸಲ್ಲಿಸುವುದು.

(ಎಸ್.ಎಸ್ ಪ್ರಸನ್ನಕುಮಾರ್ ಭಾ.ಆ.ಸೇ)
ಸಹಕಾರ ಸಂಘಗಳ ನಿಬಂಧಕರು
ಕರ್ನಾಟಕ ರಾಜ್ಯ, ಬೆಂಗಳೂರು

ಗೆ,

1) ಎಲ್ಲಾ ಪ್ರಾಂತೀಯ ಸಹಕಾರ ಸಂಘಗಳ ಜಂಟಿ ನಿಬಂಧಕರುಗಳಿಗೆ,
2) ಎಲ್ಲಾ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರುಗಳಿಗೆ,
3) ಎಲ್ಲಾ ಉಪವಿಭಾಗೀಯ ಸಹಕಾರ ಸಂಘಗಳ ಸಹಾಯಕ ನಿಬಂಧಕರುಗಳಿಗೆ

ಅನುಬಂಧ - 2

ಕರ್ನಾಟಕ ಸರ್ಕಾರ

(ಸಹಕಾರ ಇಲಾಖೆ)

ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಅಲಿ ಅಸ್ಕರ್ ರಸ್ತೆ, ಬೆಂಗಳೂರು 52

ಸಂಖ್ಯೆ:ಆರ್‌ಸಿಎಸ್/ಕೆಎಂಸಿ-4/179/2016-17 ದಿನಾಂಕ: 12-05-2017

'ಸುತ್ತೋಲೆ'

ವಿಷಯ :- 2017-18 ನೇ ಸಾಲಿನಲ್ಲಿ ರಾಜ್ಯದಲ್ಲಿರುವ ಗ್ರಾಮಪಂಚಾಯತಿಗೆ ಒಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವನ್ನು ರಚಿಸುವ ಬಗ್ಗೆ

ಉಲ್ಲೇಖ:- 1. ಮಾನ್ಯ ಮುಖ್ಯ ಮಂತ್ರಿಗಳ 2017-18 ನೇ ಸಾಲಿನ ಆಯವಯ ಭಾಷಣ ದಿ.15-3-2017

=====

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ 1 ರ ಮಾನ್ಯ ಮುಖ್ಯ ಮಂತ್ರಿಗಳ 2017-18 ನೇ ಸಾಲಿನ ಆಯವ್ಯಯ ಬಾಷಣದ ಕಂಡಿಕೆ 71 ರಲ್ಲಿ 'ಆರ್ಥಿಕವಾಗಿ ಕಾರ್ಯಸಾಧುವೆನಿಸುವ ಪ್ರತಿಯೊಂದು ಗ್ರಾಮ ಪಂಚಾಯತಿಯಲ್ಲಿ ಪ್ರಾಥಮಿಕ ಕೃಷಿ ಸಹಕಾರಿ ಸಂಘಗಳನ್ನು ಸ್ಥಾಪಿಸಲು ಕ್ರಮ ಕೈಗೊಳ್ಳಲಾಗುವುದು' ಎಂದು ಘೋಷಿಸಲಾಗಿದೆ.

ದಿ.31-3-2017 ರ ಅಂತ್ಯಕ್ಕೆ ರಾಜ್ಯದಲ್ಲಿ ಹೊಸದಾಗಿ ರಚನೆಯಾದ 393 ಗ್ರಾಮ ಪಂಚಾಯತಿಯನ್ನು ಒಳಗೊಂಡಂತೆ ಒಟ್ಟಾರೆಯಾಗಿ 6022 ಗ್ರಾಮ ಪಂಚಾಯತಿಗಳು ಇರುತ್ತವೆ. ಆದರೆ 5463 ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ಸಹಕಾರ ಇಲಾಖೆಯಲ್ಲಿ ನೊಂದಣಿಯಾಗಿದ್ದು, ಈ ಪೈಕಿ 5230 ಸಂಘಗಳು ಕಾರ್ಯನಿರತವಾಗಿವೆ. ಇದರಲ್ಲಿ ಕೆಲವು ಗ್ರಾಮ ಪಂಚಾಯತಿಗಳಿಗೆ ಎರಡು ಅಥವಾ ಹೆಚ್ಚಿನ ಪ್ಯಾಕ್ಸ್‌ಗಳೂ ಸಹ ಇರುವುದರಿಂದ ಸುಮಾರು 800 ಗ್ರಾಮ ಪಂಚಾಯತಿ ಮಟ್ಟದಲ್ಲಿ ಪ್ಯಾಕ್ಸ್‌ಗಳು ಇರುವುದಿಲ್ಲ.

ನಬಾರ್ಡ್ ಮತ್ತು ಈ ಕಚೇರಿಯ ಸುತ್ತೋಲೆಯಲ್ಲಿ ಕನಿಷ್ಟ 8 ಕಿ.ಮೀ ಪರೀದಿಗೆ ಕಡಿಮೆ ಇರದಂತೆ, ಕನಿಷ್ಟ 600 ಕುಟುಂಬಗಳಿಗೆ, ಕನಿಷ್ಟ 5000 ಎಕರೆಗೆ ಕೃಷಿ ಭೂಮಿ ಹೊಂದಿರುವ, ಕನಿಷ್ಟ 20 ಲಕ್ಷ ಸಾಲ ನೀಡಲು ಶಕ್ತವಾಗಿರುವ ಪ್ರದೇಶಗಳಲ್ಲಿ ಹೊಸ ಪ್ಯಾಕ್ಸ್‌ನ್ನು ರಚಿಸಬಹುದಾಗಿದೆ ಎಂದು ತಿಳಿಸಲಾಗಿದೆ.

ಅಂದಾಜು 6000 ಜನ ಸಂಖ್ಯೆ ಇರುವ ಗ್ರಾಮಗಳಿಗೆ ಒಂದರಂತೆ ಗ್ರಾಮ ಪಂಚಾಯತಿಗಳು ಇದ್ದು, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ಕಾರ್ಯ ವ್ಯಾಪ್ತಿಯು ರಾಜ್ಯದಲ್ಲಿರುವ ಎಲ್ಲಾ ಹಳ್ಳಿಗಳಿಗೂ ವ್ಯಾಪಿಸಿದ್ದರೂ. ಪ್ರಸ್ತುತ ಗ್ರಾಮಗಳಲ್ಲಿ ಜನ ಸಂಖ್ಯೆ ಹೆಚ್ಚುತ್ತಿದ್ದು, ಕುಟುಂಬ ವಿಭಜನೆಯಿಂದ ಭೂ ಹಿಡುವಳಿಗಳು ಕಡಿಮೆಯಾಗುತ್ತಿದ್ದು ಭೂ ಮಾಲೀಕರು ಮತ್ತು ಕುಟುಂಬಗಳು ಹೆಚ್ಚಾಗುತ್ತಿರುವುದರಿಂದ, ರೈತರಿಗೆ ಮನೆ ಬಾಗಿಲಿನಲ್ಲಿ ಬ್ಯಾಂಕಿಂಗ್ ಸೌಲಭ್ಯ ಮತ್ತು ಕೃಷಿ ಪರಿಕರಗಳ ಸೌಲಭ್ಯ ಕಲ್ಪಿಸಲು ಪ್ರತೀ ಗ್ರಾಮ ಪಂಚಾಯತಿಗೊಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವನ್ನು ರಚಿಸುವುದು ಅವಶ್ಯಕವಿರುತ್ತದೆ. ಈ ನಿಟ್ಟಿನಲ್ಲಿ ಹೊಸ ಸಂಘ ರಚಿಸುವ ಮಾನದಂಡಗಳಿಗೂ ವಿನಾಯಿತಿ ನೀಡುವ ಅವಶ್ಯಕತೆ ಇರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ 2017-18 ನೇ ಸಾಲಿನಲ್ಲಿ ಆರ್ಥಿಕವಾಗಿ ಸಬಲತೆಯಾಗುವ ಗ್ರಾಮ ಪಂಚಾಯತಿ ವಾಪ್ತಿಯಲ್ಲಿ ಹೊಸ ಪ್ಯಾಕ್ಸ್ ಗಳನ್ನು ರಚಿಸುವ ಸಲುವಾಗಿ ಜಿಲ್ಲಾ ಮಟ್ಟದಲ್ಲಿ ಈ ಕೆಳಕಂಡ ಅಧಿಕಾರಿಗಳ ಸಮಿತಿಯನ್ನು ರಚಿಸಲಾಗಿದೆ.

1. ಇಲಾಖೆಯಿಂದ ನೇಮಿಸಿದ ಸಂಬಂಧಿಸಿದ ಡಿಸಿಸಿ ಬ್ಯಾಂಕ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಅಥವಾ ಸಹಕಾರ ಸಂಘಗಳ ಉಪ ನಿಬಂಧಕರು - ಅಧ್ಯಕ್ಷರು
2. ಸಹಕಾರ ಸಂಘಗಳ ಉಪ ನಿಬಂಧಕರು ಅಥವಾ ಡಿಸಿಸಿ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು -ಸದಸ್ಯರು
3. ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು -ಸದಸ್ಯರು.
4. ಸಂಬಂಧಿಸಿದ ಜಿಲ್ಲೆಯ ಕೇಂದ್ರ ಸ್ಥಾನದಲ್ಲಿರುವ ಉಪ ವಿಭಾಗದ ಸಹಾಯಕ ನಿಬಂಧಕರುಗಳು-ಸದಸ್ಯ ಕಾರ್ಯದರ್ಶಿ.

ಮೇಲಿನ ಸಮಿತಿಯು ಈ ಕೆಳಕಂಡ ಅಂಶಗಳನ್ವಯ ಅಧಿಕಾರಿಗಳು ಸಂಬಂಧಿಸಿದ ಗ್ರಾಮ [illegible]
ಪಂಚಾಯತಿಯಲ್ಲಿ ಪ್ಯಾಕ್ಸ್ ಗಳನ್ನು ರಚಿಸುವಂತೆ ಕ್ರಮ ಕೈಗೊಳ್ಳಲು ಆದೇಶಿಸಲಾಗಿದೆ.

1. ಮೇಲಿನ ಸಮಿತಿಯು ಇವಕ್ಕೆ ಲಗತ್ತಿಸಿದ ಅನುಬಂಧ-1 ರಲ್ಲಿ ಪ್ಯಾಕ್ಸ್‌ಗಳ ಕಾರ್ಯವ್ಯಾಪ್ತಿಯಲ್ಲಿನ ಗ್ರಾಮಗಳ ವಿವರ ಮತ್ತು ಸದಸ್ಯರ ವಿವರ, ಗ್ರಾಮ ಪಂಚಾಯತಿಯ ಕಾರ್ಯ ವ್ಯಾಪ್ತಿ ಮತ್ತು ಭೂಮಿಯವಳ ಹಾಗೂ ಜನ ಸಂಖ್ಯೆ ಮತ್ತು ಸಾಲಗಾರರ ವಿವರ ಹಾಗೂ ಅನುಬಂಧ- 2 ರಲ್ಲಿ ಹಾಲಿ ಇರುವ ಸಂಘದ ಆರ್ಥಿಕ ಪರಿಸ್ಥಿತಿ ಮತ್ತು ಮೂಲಭೂತ ಸೌಕರ್ಯಗಳ ಮಾಹಿತಿಗಳನ್ನು ದಿ.15-6-2017 ರೊಳಗೆ ಸಂಬಂಧಿಸಿದ ಸಹಕಾರ ಅಭಿವೃದ್ಧಿ ಅಧಿಕಾರಿಯಿಂದ ಪಡೆಯತಕ್ಕದ್ದು. ಸಂಬಂಧಿಸಿದ ಉಪ ನಿಬಂಧಕರು ಸದರಿ ಮಾಹಿತಿಯನ್ನು ಕ್ರೋಡೀಕರಿಸಿ ನಿಬಂಧಕರ ಕಛೇರಿಗೆ ಸಲ್ಲಿಸತಕ್ಕದ್ದು.

2. ಪ್ರತೀ ಗ್ರಾಮ ಪಂಚಾಯತಿಗೆ ಒಂದರಂತೆ ಒಂದು ಹೊಸ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವು ಇರುವಂತೆ ಜಿಲ್ಲಾ ಮಟ್ಟದ ಸಮಿತಿಯು ಟಿಪ್ಪಣಿಯನ್ನು ತಯಾರಿಸತಕ್ಕದ್ದು. ಈ ರೀತಿ ಹೊಸ ಸಂಘವನ್ನು ರಚಿಸುವಾಗ ಪ್ರತೀ ಸಂಘವು ಕನಿಷ್ಠ 4000 ಎಕರೆ ಸಾಗುವಳಿ ಭೂಮಿಯನ್ನು ಹೊಂದಿರುವ, ಕನಿಷ್ಠ 5 ಕಿ.ಮೀ ಪರಿಧಿಯನ್ನು ಹೊಂದಿರುವ, ಕನಿಷ್ಠ 600 ಕುಟುಂಬಗಳನ್ನು ಹೊಂದಿರುವ ಗ್ರಾಮಗಳನ್ನು ಒಳಗೊಂಡಿರುವಂತೆ ನೋಡಿಕೊಳ್ಳತಕ್ಕದ್ದು. ಮೂರೂ ಮಾನದಂಡಗಳನ್ನು ಅರ್ಹತೆ ಹೊಂದಿರತಕ್ಕದ್ದು.

3. ಎರಡು ಅಥವಾ ಹೆಚ್ಚಿನ ಗ್ರಾಮ ಪಂಚಾಯತಿಗಳ ವ್ಯಾಪ್ತಿಯನ್ನು ಹೊಂದಿರುವ ಹಾಲಿ ಇರುವ ಪ್ಯಾಕ್ಸ್‌ನ್ನು ವಿಭಜನೆ ಮಾಡಿದರೆ ಹಾಲಿ ಇರುವ ಸಂಘ ಮತ್ತು ಹೊಸದಾಗಿ ರಚಿಸಬಹುದಾದ ಸಂಘದ ವ್ಯಾಪ್ತಿಗೆ ಬರುವ ಗ್ರಾಮಗಳ ವಿವರ, ಸಂಘದ ಕಚೇರಿ ಇರಬೇಕಾದ ಗ್ರಾಮದ ವಿವರ, ಅದಕ್ಕೆ ಸಂಬಂಧಿಸಿದ ಮೂಲ ಭೂತ ಸೌಕರ್ಯಗಳ ವಿವರ ಮುಂತಾದ ವಿವರಗಳ ಟಿಪ್ಪಣಿಯನ್ನು ತಯಾರಿಸಿ ಸಮಿತಿಯಿಂದ ಅನುಮೋದನೆ ಪಡೆದು ದಿ. 15-7-2017 ರೊಳಗೆ ಸದಸ್ಯ ಕಾರ್ಯದರ್ಶಿಯವರು ಸಂಬಂಧಿಸಿದ ಹಾಲಿ ಸಂಘಕ್ಕೆ ನೀಡತಕ್ಕದ್ದು.

4. ಹಾಲಿ ಇರುವ ಸಂಘವನ್ನು ವಿಭಜನೆ ಮಾಡಿ ಹೊಸ ಸಂಘವನ್ನು ರಚಿಸುವಾಗ ಮತ್ತೊಂದು ಸಂಘದ ಗ್ರಾಮಗಳನ್ನು ಹೊಸ ಸಂಘಕ್ಕೆ ಸೇರ್ಪಡೆ ಮಾಡಬಹುದಾಗಿದೆ. ಆದರೆ ಸದರಿ ಸಂಘವು ಮೇಲಿನ ಕನಿಷ್ಠ ಮಾನದಂಡಗಳನ್ನು ಹೊಂದಿರುವಂತೆ ನೋಡಿಕೊಳ್ಳತಕ್ಕದ್ದು. ಒಂದು ಗ್ರಾಮವನ್ನು ಒಂದೇ ಸಂಘದ ವ್ಯಾಪ್ತಿಗೆ ಬರುವಂತೆ ನೋಡಿಕೊಳ್ಳತಕ್ಕದ್ದು. ಯಾವುದೇ ಎರಡು ಸಂಘಗಳು ಒಂದೇ ಗ್ರಾಮವನ್ನು ಹೊಂದಿರತಕ್ಕದ್ದಲ್ಲ.(ತಾಲ್ಲೂಕು ಮಟ್ಟದ ಕೆಲವು ವಿಶೇಷ ಪ್ರಕರಣದ ಸಂಘಗಳನ್ನು ಹೊರತುಪಡಿಸಿ)

5. ಹಾಲಿ ಇರುವ ಸಂಘವು ದಿ.30-9-2017 ರೊಳಗೆ ನಡೆಯುವ ಸರ್ವ ಸದಸ್ಯರ ಸಭೆಯಲ್ಲಿ ಸಂಘವನ್ನು ವಿಭಜಿಸುವ ಬಗ್ಗೆ ಅಥವಾ ಹಾಲಿ ಸಂಘದ ಶಾಖೆಯನ್ನು ತೆರೆಯುವ ಬಗ್ಗೆ ಸಮಿತಿಯು ನೀಡಿದ ಟಿಪ್ಪಣಿಯನ್ನು ನಿರ್ಣಯಕ್ಕೆ ಮಂಡಿಸತಕ್ಕದ್ದು.

6. ಸರ್ವ ಸದಸ್ಯರ ಸಭೆಯಲ್ಲಿ ಸಮಿತಿ ನೀಡುವ ಟಿಪ್ಪಣಿಯನ್ವಯ ಅಥವಾ ಕೆಲವು ಮಾರ್ಪಾಡುಗಳೊಂದಿಗೆ ಹಾಲಿ ಇರುವ ಸಂಘವನ್ನು ವಿಭಜನೆ ಮಾಡಲು ಅಥವಾ ಶಾಖೆಯನ್ನು ತೆರೆಯಲು ಒಪ್ಪಿದಲ್ಲಿ ಸಂಘದ ಕಾರ್ಯದರ್ಶಿಯು ಸಮಿತಿಗೆ ಸಂಘವನ್ನು ವಿಭಜಿಸಿ ಹೊಸ ಸಂಘವನ್ನು ರಚಿಸಲು ಪ್ರಸ್ತಾವನೆ ಸಲ್ಲಿಸತಕ್ಕದ್ದು.

7. ಸಮಿತಿಯು ಸಂಘವು ಸಲ್ಲಿಸಿದ ಪ್ರಸ್ತಾವನೆಯನ್ನು ಮತ್ತೊಮ್ಮೆ ಪರಿಶೀಲಿಸಿ ಹಾಲಿ ಸಂಘದ ಕಾರ್ಯದರ್ಶಿ ಮತ್ತು ಸಂಬಂಧಿಸಿದ ಅಧಿಕಾರಿಗಳಿಗೆ ಹೊಸ ಸಂಘವನ್ನು ಸ್ಥಾಪಿಸಲು ಆದೇಶ ನೀಡತಕ್ಕದ್ದು.

8. ಸಂಬಂಧಿಸಿದ ಹಾಲಿ ಸಂಘದ ಕಾರ್ಯದರ್ಶಿ ಮತ್ತು ಸಂಬಂಧಿಸಿದ ಅಧಿಕಾರಿಗಳು ನಿಯಮಾನುಸಾರ ಸಂಘವನ್ನು ವಿಭಜನೆ ಮಾಡಿ ಹೊಸ ಸಂಘವನ್ನು ರಚಿಸಲು ಕ್ರಮವಿಟ್ಟು ದಿ.31-

[illegible]

9. ಹೊಸದಾಗಿ ನೋಂದಾಯಿಸಿದ ಸಂಘವು ತನ್ನ ಚಟುವಟಿಕೆಯ ನಿರ್ವಹಣೆಗಾಗಿ, ಆದಾಯದಿಂದ ಪ್ರತೀ ತಿಂಗಳು ಕನಿಷ್ಠ ರೂ.10000 ಗಳ ಆದಾಯ ಗಳಿಸುವ ವರೆಗೆ ಹಾಲಿ ಇರುವ ಅಥವಾ ಇತರೆ ಸಂಘದ ಕಾರ್ಯದರ್ಶಿಯನ್ನು ಅಥವಾ ನುರಿತ ಸಿಬ್ಬಂದಿಗಳನ್ನು ಪ್ರಭಾರ ಕಾರ್ಯದರ್ಶಿಯಾಗಿ ನೇಮಕ ಮಾಡತಕ್ಕದ್ದು.

10. ಹೊಸ ಸಂಘವನ್ನು ಸ್ಥಾಪಿಸಲು ಸರ್ಕಾರದಿಂದ ಯಾವುದೇ ಅನುದಾನವನ್ನು ನೀಡಲಾಗುವುದಿಲ್ಲ.

11. ಸಮಿತಿ ಸದಸ್ಯ ಕಾರ್ಯದರ್ಶಿಯವರು ಪ್ರತೀ ತಿಂಗಳು ಈ ಬಗ್ಗೆ ಪ್ರಗತಿ ವರದಿಯನ್ನು ಈ ಕಚೇರಿಗೆ ಸಲ್ಲಿಸತಕ್ಕದ್ದು.

12. ಈಗಾಗಲೇ ಹಾಲಿ ಇರುವ ಸಂಘಗಳನ್ನು ವಿಭಜಿಸಿ ಹೊಸ ಸಂಘಗಳನ್ನು ಸ್ಥಾಪಿಸಲು ಬೇಡಿಕೆ ಇದ್ದರೆ, ಸಂಬಂಧಿಸಿದ ಅಧಿಕಾರಿಗಳು ಸಮಿತಿಗೆ ವರದಿ ನೀಡಿ ಅಧ್ಯತೆ ಮೇಲೆ ಹೊಸ ಸಂಘವನ್ನು ಸ್ಥಾಪಿಸಲು ಕ್ರಮ ಕೈಗೊಳ್ಳತಕ್ಕದ್ದು.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪಾಲಿಸಿ 2017-18 ನೇ ಸಾಲಿನಲ್ಲಿ ಕಾರ್ಯಸಾಧುವೆಸುವ ಪ್ರತೀ ಗ್ರಾಮ ಪಂಚಾಯತಿಗೊಂದು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ರಚಿಸಲು ಎಲ್ಲಾ ಅವಶ್ಯಕ ಕ್ರಮಗಳನ್ನು ಕೈಗೊಳ್ಳಲು ಆದೇಶಿಸಲಾಗಿದೆ.

(ಎಂ.ಕೆ.ಅಯ್ಯಪ್ಪ)
ಸಹಕಾರ ಸಂಘಗಳ ನಿಬಂಧಕರು
ಕರ್ನಾಟಕ ರಾಜ್ಯ, ಬೆಂಗಳೂರು

ಗೆ,

1. ಎಲ್ಲಾ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳ ಮುಖ್ಯಕಾರ್ಯನಿರ್ವಹಣಾಧಿಕಾರಿಗಳು.
2. ಎಲ್ಲಾ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು.
3. ಎಲ್ಲಾ ಉಪವಿಭಾಗೀಯ ಸಹಕಾರ ಸಂಘಗಳ ಸಹಾಯಕ ನಿಬಂಧಕರುಗಳು.

ಪ್ರತಿಯನ್ನು ಸೂಕ್ತ ಕ್ರಮಕ್ಕಾಗಿ ನೀಡಲಾಗಿದೆ.

1. ಮುಖ್ಯಕಾರ್ಯನಿರ್ವಹಣಾಧಿಕಾರಿಗಳು,ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ.,
2. ಎಲ್ಲಾ ಪ್ರಾಂತೀಯ ಸಹಕಾರ ಸಂಘಗಳ ಜಂಟಿ ನಿಬಂಧಕರು.

ಪ್ರತಿಯನ್ನು

1. ಸರ್ಕಾರದ ಕಾರ್ಯದರ್ಶಿ, ಸಹಕಾರ ಇಲಾಖೆ ರವರ ಮಾಹಿತಿಗಾಗಿ ಸಲ್ಲಿಸಲಾಗಿದೆ.

details of pacs business in each village of its area of operation ( No in actual and amount in lakhs.) (as on 31-3-2017)(in english only)

| Sl no | Name of the pacs | location of the village where pacs office is located | Name of the villages covered | village code number | Name of the gram panchayat the each village comes under | distance of village from head office in km | No of families in each village | Population each village | cultivable land in acre in each village | Out of which irrigated land are in acre | total members in the pacs in each village | Borrowing members in the pacs in each village | amount barrowed(o/s) in each village | out of which barrowing members for agricultural purposes in each village | amount barrowed for agriculture purpose in each village (o/s) | No of depositors in each village | deposit amount in each village(o/s) |
|---|---|---|---|---|---|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 |
| | | | | | | | | | | | | | | | | | |

details of pacs viability as on 31-3-2017( No In actual and amount in lakhs.)(in English only)

| Sl no | Name of the pacs | radius of area of operation in km | no. Of employees | working capital | Loan out standing | agri loan o/s | Non agri loan o/s | deposit o/s | non credit business done during 2016-17 | accumulated loss | profit | total land owned in sq feet | out of which land in other village | vacant area in sq ft | total Building area owned in sq ft | out of which area for gowdown purpose | out of which area for agri business purpose | out of which area for pds purpose |
|---|---|---|---|---|---|---|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 |
| | | | | | | | | | | | | | | | | | | |

AL BANK FOR AGRICULTURE
URAL DEVELOPMENT

STITUTIONAL DEVELOPMENT DEPARTMENT
OPERATIVE BANKS DIVISION
arment House,
Dr. Annie Besant Road,
Post Box No. 16575,
Worli, Bombay - 400 018.

Telephone:4939930-49
Telegrams:'Agricredit'
Bombay
Telex 11-75529-AGCD-IN

6

(Hindi Version follows)

Ref.No.NB.IDD.Coop. 753-A/55(i)Gen/88-89

30 November 1988
09 Agrahayana 1910(S)

ಶಸ 204-3

The Secretary
Agriculture and Cooperation Department
Government of KARNATAKA
BANGALORE

Dear Sir

Viability norms for PACS

As you are aware, in pursuance of the recommendations of the meeting of the Registrars of Co-operative Societies held in 1976 on the question of viability of Primary Agricultural Credit Societies(PACS), Reserve Bank of India had advised all State Governments that a viable PACS should have minimum loan business of Rs.2 lakhs per annum. It was also indicated that in assuming the viability of PACS, a gross cropped area of 2000 hectares might be considered adequate to provide a minimum short-term credit potential of Rs.2 lakhs per annum to the concerned society. Since then, numerous developments have taken place in the economy as also in the development of agriculture. The situation where PACS was earlier considered as the only agency for purveying rural credit has undergone a change with the induction

(Contd..)

7



of commercial banks and RRBs in the field of rural credit. Similarly, with the decision of involving co-operatives in a bigger way in implementation of National Priority Programmes like IRDP etc., the PACS have also been encouraged, of late, to involve themselves in medium and long-term lendings. Besides, in some States, the PACS have also been entrusted with the task of running the Public Distributions System and similar other non-credit business. These changes in the role of PACS coupled with the increased level of their establishment costs have necessitated a relook at the viability norms for PACS in the present circumstances.

In fact, the National Bank had been receiving requests to revise these norms taking into account the above developments. With this in view, we had conducted a nationwide study of PACS which revealed that to attain a viable status it would be essential for these societies to undertake besides short term loan business, other loan business like provision of term credit etc. as also provide certain non-credit services to their members. The study also revealed that failure to tap deposits and inadequacy of margins in non-credit business are some of the factors responsible for the present non-viable conditions of the societies. Taking into account these factors it is now considered that the PACS may have to have a minimum short-term loan business of Rs.10.00 lakhs to become/remain a

viable unit. In order to develop these societies into operationally efficient, managerially competent and financially self reliant units, they may have to take steps to implement the following important measures:

a) Increase in membership particularly by enrolling farmers, agricultural labourers, village artisans and craftsmen.

b) To maintain a sustained tempo of deposit mobilisation to the extent of at least 20% of total loan business in a year.

c) Sustain a total borrowing membership of at least 60% of total membership.

d) Diversification of loan business.

e) Ensuring proper utilisation of loans by the beneficiaries.

f) To impart suitable training to the Secretaries.

g) Rationalisation of loan policies and procedures so that loans are disbursed in time and to ensure that members are not required to approach any other agency for their credit requirement.

h) Special campaign for recovery of loans by initiating both persuasive and coercive measures with necessary assistance from the concerned CCB and Cooperation Deptt. against the defaulters, specifically the big farmers and other influential borrowers.

i) To take up non credit business as also deposit mobilisation by starting innovative schemes which would inculcate thrift habits amongst the members which will improve the profitability of the PACS.

It is requested that the revised norms for viability of PACS and other suggestion as above may please be kept in view while planning for development of PACS in your State/Union Territory.

Yours faithfully,

(N.D. Karmarkar)
General Manager

Endt.No.NB.IDD.Coop./753-B/ 55(i)Gen/88-89 of date.

Copy forwarded for information and necessary action to:

1) The Secretary, Government of India, Ministry of Agriculture, Department of Agriculture and Co-operation, Krishi Bhavan, New Delhi 110 001.

2) The Secretary, Planning Commission, Yojana Bhavan, Sansad Marg, New Delhi - 110 001.

3) The Additional Secretary, Ministry of Finance, Department of Economic Affairs, (Banking Division), Government of India, New Delhi - 110 001.

4) The Additional Secretary, Government of India, Ministry of Rural Development, Krishi Bhavan, New Delhi 110 001.

5) The Chief Secretary to the Government (Concerned States).

6) The Agricultural Production Commissioner (Concerned States).

7) The Director, Institutional Finance (Concerned States).

8) The Registrar of Cooperative Societies (Concerned States).

---5/-

## NORMS IN RESPECT OF AGRICULTURAL SERVICE COOPERATIVE SOCIETIES (VYAVASAYA SEVA SAHAKARI SANGHA)

1) Each society should cover [illegible] acres of gross cultivated area.

2) The area of operation should as far as possible not exceed a radious of 8 Kms. from the Headquarters of the society.

3) The society should have a minimum short-term lending potential to the extent of over Rs. 10 lakhs.

4) There should normally be not more than one such society in a village.

5) As far as may be there should be no overlapping in the area of operation of the Cooperative Societies.

6) Each society should be capable of serving at least 600 families.
(in case of Cooperative societies in Hilly tracts and inaccessible area the above norms being relaxed to the extent necessary).

## NORMS FOR FARMERS SERVICE COOPERATIVE SOCIETIES. (RYTARA SEVA SAHAKARI SANGHA)

1) The society should cover a population of not less than 10,000.

2) It should have a lending potential of Rs.25 lakhs.

3) It should cover 10,000 to 15,000 acres of dry land under cultivation or 5000 to 8000 acres of wet land.

4) The area of operation should as far as may be not exceed a radious of 10 Kms. from the Headquarters of the society.

5) As far as may be there should be no over-lapping in the area of operation of the Cooperative Societies.

6) Each society should be capable of serving atleast 2000 families.

And whereas the concerned persons have also been consulted informally in the matter.